# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1817 |
| ಸದಸ್ಯರ ಹೆಸರು | ಶ್ರೀ ಎಂ.ಎಲ್. ಅನಿಲ್ ಕುಮಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | 15.03.2022 |
| ಉತ್ತರಿಸುವ ಸಚಿವರು | ಕೃಷಿ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೃಷಿ ಉತ್ಪನ್ನಗಳ ಹಾಗೂ ಕೃಷಿ ಬೆಳೆಗಳ ಬೆಲೆ ನಿಗಧಿಪಡಿಸುವ ಬಗ್ಗೆ ಸರ್ಕಾರ ಯಾವ ರೀತಿಯ ಕ್ರಮ ಕೈಗೊಳ್ಳಲಿದೆ; ಇದಕ್ಕಾಗಿ ಸರ್ಕಾರ ಯಾವುದಾದರೂ ಆಯೋಗ/ಕಮಿಟಿ ರಚಿಸಿದೆಯೇ; ಹಾಗಿದ್ದಲ್ಲಿ ಸಂಪೂರ್ಣ ಮಾಹಿತಿ ನೀಡುವುದು; ಇಲ್ಲವಾದಲ್ಲಿ, ಬೆಳೆಗಳ ಬೆಲೆ ನಿಗದಿಯನ್ನು ಸರ್ಕಾರ ಹೇಗೆ ನಡೆಸುತ್ತದೆ; (ಮಾಹಿತಿ ನೀಡುವುದು) | ಕೃಷಿ ಉತ್ಪನ್ನಗಳಿಗೆ ಬೆಂಬಲ ಬೆಲೆಯನ್ನು ಕೇಂದ್ರ ಸರ್ಕಾರವು ನಿಗದಿಪಡಿಸುತ್ತದೆ. ಕೇಂದ್ರ ಸರ್ಕಾರವು ಕನಿಷ್ಠ ಬೆಂಬಲ ಬೆಲೆಯನ್ನು ಘೋಷಿಸುವ ಪೂರ್ವದಲ್ಲಿ, ಕೇಂದ್ರದ ಕೃಷಿ ವೆಚ್ಚ ಮತ್ತು ಬೆಲೆ ಆಯೋಗ (Commission on Agricultural Costs and Prices (CACP)) ಸಂಸ್ಥೆಯು ಪ್ರಮುಖ ಕೃಷಿ ಹಾಗೂ ತೋಟಗಾರಿಕಾ ಉತ್ಪನ್ನಗಳ ರಾಜ್ಯವಾರು ಉತ್ಪಾದನಾ ವೆಚ್ಚದ ಮಾಹಿತಿಯನ್ನು ಕ್ರೋಢಿಕರಿಸಿ, ಅವುಗಳ ಆಧಾರದ ಮೇಲೆ ಉತ್ಪಾದನಾ ವೆಚ್ಚ (ರೈತ ಭರಿಸಿದ ಎಲ್ಲಾ ವೆಚ್ಚಗಳು ಮತ್ತು ಕುಟುಂಬದ ಶ್ರಮ) ಹಾಗೂ ಉತ್ಪಾದನಾ ವೆಚ್ಚದ ಶೇ.50 ರಷ್ಟು ಸೇರಿಸಿ ಬೆಂಬಲ ಬೆಲೆಯನ್ನು ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡುತ್ತದೆ. ಈ ಆಧಾರದ ಮೇಲೆ ಕೇಂದ್ರ ಸರ್ಕಾರವು ಮುಂಗಾರು / ಹಿಂಗಾರು ಹಂಗಾಮಿಗೆ ಮುಂಚಿತವಾಗಿ ಬೆಂಬಲ ಬೆಲೆಯನ್ನು ಘೋಷಿಸುತ್ತದೆ. ಕೃಷಿ ಉತ್ಪನ್ನಗಳು ಕೇಂದ್ರ ಸರ್ಕಾರ ಘೋಷಿತ ಬೆಂಬಲ ಬೆಲೆಗಿಂತ ಕಡಿಮೆ ದರದಲ್ಲಿ ಮಾರಾಟವಾಗುವ ಸಂದರ್ಭಗಳಲ್ಲಿ, ಕೇಂದ್ರ ಸರ್ಕಾರದ ಅನುಮತಿಯೊಂದಿಗೆ ಬೆಂಬಲ ಬೆಲೆ ಯೋಜನೆಯಲ್ಲಿ ಉತ್ಪನ್ನಗಳನ್ನು ಖರೀದಿಸಲು ಕ್ರಮ ವಹಿಸಲಾಗುತ್ತದೆ.<br><br>ಸಾಮಾನ್ಯವಾಗಿ ಕೊಯಿಲು ಸಮಯದಲ್ಲಿ ಕೃಷಿ ಉತ್ಪನ್ನಗಳ ಬೆಲೆ ಕೇಂದ್ರ ಸರ್ಕಾರ ಘೋಷಿತ ಬೆಂಬಲ ಬೆಲೆಗಿಂತ ಕಡಿಮೆ ಬೆಲೆಯಲ್ಲಿ ಮಾರಾಟವಾಗುತ್ತಿರುವ ಸಂದರ್ಭಗಳಲ್ಲಿ ಅಂತಹ ಉತ್ಪನ್ನಗಳನ್ನು ಬೆಂಬಲ ಬೆಲೆಯಲ್ಲಿ ಖರೀದಿಸುವ ಬಗ್ಗೆ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿನ ಜಿಲ್ಲಾ ಟಾಸ್ಕ್ ಫೋರ್ಸ್ ಸಮಿತಿಯು ಸಭೆ ಜರುಗಿಸಿ ನಡವಳಿಯನ್ನು ಸರ್ಕಾರಕ್ಕೆ ಕಳುಹಿಸಿಕೊಡುತ್ತದೆ. ಸದರಿ ನಡವಳಿಗಳ ಆಧಾರದ ಮೇಲೆ ಬೆಲೆ ಸ್ಥಿರೀಕರಣ ಸಚಿವ ಸಂಪುಟ ಉಪ ಸಮಿತಿಯು ತೀರ್ಮಾನವನ್ನು ಕೈಗೊಳ್ಳುತ್ತದೆ. ಸದರಿ ತೀರ್ಮಾನದ ಆಧಾರದ ಮೇಲೆ ರಾಜ್ಯ ಸರ್ಕಾರವು ಕೇಂದ್ರ ಸರ್ಕಾರಕ್ಕೆ ಉತ್ಪನ್ನವನ್ನು ಬೆಂಬಲ ಬೆಲೆಯಲ್ಲಿ ಖರೀದಿಸಲು ಅನುಮತಿ ಪಡೆದ ನಂತರ ಕೇಂದ್ರ ಖರೀದಿ ಸಂಸ್ಥೆಗಳು ರಾಜ್ಯ ಖರೀದಿ ಸಂಸ್ಥೆಗಳ ಸಹಕಾರದೊಂದಿಗೆ ಉತ್ಪನ್ನವನ್ನು ಬೆಂಬಲ ಬೆಲೆಯಲ್ಲಿ ಖರೀದಿಸುತ್ತವೆ.<br><br>ರಾಜ್ಯದಲ್ಲಿ ಕೃಷಿ ಹಾಗು ತೋಟಗಾರಿಕಾ ಬೆಳಗಳ ಉತ್ಪಾದನಾ ವೆಚ್ಚವನ್ನು ವೈಜ್ಞಾನಿಕವಾಗಿ ಲೆಕ್ಕಾಚಾರ ಹಾಕಿ ಸರ್ಕಾರಕ್ಕೆ ಸೂಕ್ತ ಶಿಫಾರಸ್ಸು ಮಾಡುವ ಸಲುವಾಗಿ ಕರ್ನಾಟಕ ಕೃಷಿ ಬೆಲೆ ಆಯೋಗವನ್ನು ರಚಿಸಲಾಗಿದೆ. ಕೃಷಿ ಬೆಲೆ ಆಯೋಗವು 2014 ಜೂನ್ ಮಾಹೆಯಿಂದ ಕಾರ್ಯನಿರ್ವಹಿಸುತ್ತಿದೆ. |

| | | |
|---|---|---|
| | | ಶ್ರೀ ಹನುಮನಗೌಡ ಬೆಳಗುರ್ಕಿ ಇವರು ಆಯೋಗದ ಅಧ್ಯಕ್ಷರಾಗಿರುತ್ತಾರೆ. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಕೃಷಿ ಇಲಾಖೆ ಮತ್ತು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸಹಕಾರ ಇಲಾಖೆ ಇವರು ಆಯೋಗದ ಸದಸ್ಯರಾಗಿರುತ್ತಾರೆ. ಆಯೋಗದಲ್ಲಿ ಇಬ್ಬರು ಅಧಿಕಾರೇತರ ಸದಸ್ಯರಿಗೆ ಅವಕಾಶ ಕಲ್ಪಿಸಲಾಗಿದ್ದು, ಪ್ರಸ್ತುತ ದಿನಾಂಕ 09-03-2022ರ ಸರ್ಕಾರದ ಆದೇಶದಲ್ಲಿ ಶ್ರೀ ಕೃಷ್ಣೇಗೌಡ ಬಿನ್ ಲೇಟ್ ಟಿ. ಟಿ. ಕರಿಗೌಡ, ಶಾಂತಿನಗರ, ಹಾಸನ ರವರನ್ನು ಕೃಷಿ ಬೆಲೆ ಆಯೋಗದ ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ಆದೇಶಿಸಲಾಗಿದೆ.<br>ಆಯೋಗವು ರಾಜ್ಯದ ಪ್ರಮುಖ ಕೃಷಿ / ತೋಟಗಾರಿಕಾ ಉತ್ಪನ್ನಗಳ ಉತ್ಪಾದನಾ ವೆಚ್ಚವನ್ನು ಕೃಷಿ ಹಾಗೂ ತೋಟಗಾರಿಕಾ ವಿಶ್ವವಿದ್ಯಾಲಯಗಳ ಸಹಯೋಗದಲ್ಲಿ ರೈತರ ಸಹಭಾಗಿತ್ವದಲ್ಲಿ ವೈಜ್ಞಾನಿಕವಾಗಿ ಲೆಕ್ಕಾಚಾರ ಹಾಕಿ ಸರ್ಕಾರಕ್ಕೆ ವರದಿ ಸಲ್ಲಿಸುತ್ತಿದೆ. ಅದರನ್ವಯ ರಾಜ್ಯ ಸರ್ಕಾರದಿಂದ ಕೇಂದ್ರ ಸರ್ಕಾರಕ್ಕೆ ಬೆಂಬಲ ಬೆಲೆ ನಿಗಧಿಪಡಿಸಲು ಸೂಕ್ತ ಶಿಫಾರಸ್ಸು ಮಾಡಲಾಗುತ್ತದೆ. ಅವಶ್ಯಕ ಸಂದರ್ಭದಲ್ಲಿ ಕೇಂದ್ರ ಸರ್ಕಾರ ಘೋಷಿತ ಬೆಂಬಲ ಬೆಲೆಯು ರಾಜ್ಯದ ರೈತರಿಗೆ ಲಾಭದಾಯಕವಾಗದ ಸಂದರ್ಭಗಳಲ್ಲಿ ಬೆಲೆ ಸ್ಥಿರೀಕರಣ ಸಚಿವ ಸಂಪುಟ ಉಪ ಸಮಿತಿಯು ರಾಜ್ಯ ಸರ್ಕಾರದ ಪ್ರೋತ್ಸಾಹ ಧನ ನೀಡಲು ತೀರ್ಮಾನಿಸುತ್ತದೆ. |
| ಆ) | Scale of finance ಕೃಷಿಗೆ ಸಂಬಂಧಿಸಿದಂತೆ (Relate to Agriculture) ಎಂದರೇನು; (ಪೂರ್ಣ ಮಾಹಿತಿ ನೀಡುವುದು) ಬೆಲೆ ನಿಗದಿಪಡಿಸುವಲ್ಲಿ ಇದರ ಪಾತ್ರವೇನು; | Scale of Finance ಎಂದರೆ ರಾಜ್ಯದ ಎಲ್ಲಾ ರೀತಿಯ ಬ್ಯಾಂಕುಗಳು ಮತ್ತು ಸಹಕಾರ ಸಂಘಗಳು ರೈತರಿಗೆ ಬೆಳೆ ಸಾಲ ವಿತರಿಸಲು ರಾಜ್ಯ ಮಟ್ಟದ ತಾಂತ್ರಿಕ ಸಮಿತಿಯು ಪ್ರತಿ ಬೆಳೆಗೆ ಒಂದು ಎಕರೆಗೆ ನಿಗದಿಪಡಿಸಿದ ಸಾಲದ ಮಿತಿಯಾಗಿರುತ್ತದೆ.<br>ನಬಾರ್ಡ್ ಸುತ್ತೋಲೆಯನ್ವಯ ಪ್ರತಿ ಬೆಳೆಗೆ ಸಾಲದ ಮಿತಿಯನ್ನು ಉತ್ಪಾದನಾ ವೆಚ್ಚ, ಉತ್ಪಾದಕತೆ ಮತ್ತು ಉತ್ಪನ್ನದ ಮಾರುಕಟ್ಟೆ ದರವನ್ನು ಆಧರಿಸಿ ನಿಗಧಿಪಡಿಸಲಾಗುತ್ತಿದೆ.<br>ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಕೃಷಿ ಮತ್ತು ಪೂರಕ ಇಲಾಖೆಗಳ ಜಿಲ್ಲಾ ಮಟ್ಟದ ಅಧಿಕಾರಿಗಳು, ಲೀಡ್ ಬ್ಯಾಂಕ್ ವ್ಯವಸ್ಥಾಪಕರು, ನಬಾರ್ಡ್‌ನ ಜಿಲ್ಲಾ ಪ್ರಬಂಧಕರು, ಪ್ರಮುಖ ಸರ್ಕಾರೇತರ ಸಂಸ್ಥೆಗಳ ಪ್ರತಿನಿಧಿಗಳು ಮತ್ತು ಪ್ರಗತಿಪರ ರೈತರನ್ನೊಳಗೊಂಡಂತೆ ಡಿಸಿಸಿ ಬ್ಯಾಂಕಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಸದಸ್ಯ ಕಾರ್ಯದರ್ಶಿಯಾಗಿರುವ ಜಿಲ್ಲಾ ಮಟ್ಟದ ತಾಂತ್ರಿಕ ಸಮಿತಿ ಸಭೆಯಲ್ಲಿ ಪ್ರತಿ ಬೆಳೆಗೆ Scale of Finance ಮಿತಿಯನ್ನು ನಿಗಧಿಪಡಿಸಿ ರಾಜ್ಯ ಮಟ್ಟದ ಸಮಿತಿಗೆ ಸಲ್ಲಿಸಲಾಗುತ್ತಿದೆ.<br>ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕೃಷಿ ಇಲಾಖೆಯವರ ಅಧ್ಯಕ್ಷತೆಯಲ್ಲಿ, ಕೃಷಿ ಮತ್ತು ಪೂರಕ ಇಲಾಖೆಗಳ ಇಲಾಖಾ ಮುಖ್ಯಸ್ಥರುಗಳು, ಆರ್. ಬಿ. ಐ ನ ಪ್ರಾದೇಶಿಕ ನಿರ್ದೇಶಕರು, ನಬಾರ್ಡ್‌ನ ಮುಖ್ಯ ಪ್ರಬಂಧಕರು, ರಾಜ್ಯ ಬ್ಯಾಂಕರ್ಸ್ ಸಮಿತಿಯ ಸಂಚಾಲಕರು, ಅಪೆಕ್ಸ್ ಬ್ಯಾಂಕ್‌ನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಸದಸ್ಯ ಕಾರ್ಯದರ್ಶಿಯಾಗಿರುವ ರಾಜ್ಯ ಮಟ್ಟದ ತಾಂತ್ರಿಕ ಸಮಿತಿಯಲ್ಲಿ ಪ್ರತಿ ಬೆಳೆಗೆ ಸಾಲದ ಮಿತಿಯನ್ನು ನಿಗದಿಪಡಿಸಿ ಅಧಿಸೂಚಿಸಲಾಗುತ್ತದೆ.<br>ಬ್ಯಾಂಕುಗಳು ಮತ್ತು ಸಹಕಾರ ಸಂಘಗಳು ರೈತರು ಹೊಂದಿದ ಒಟ್ಟು ಭೂಹಿಡುವಳಿ, ಬೆಳೆಯುವ ಬೆಳೆ ಮತ್ತು Scale of Finance ಆಧಾರವಾಗಿ ಗರಿಷ್ಠ ಸಾಲವನ್ನು ವಿತರಿಸಬೇಕಿರುತ್ತದೆ. |

| | | |
|---|---|---|
| ಇ) | ಜಿಲ್ಲಾ ಮಟ್ಟದಲ್ಲಿ ಕೃಷಿ ಬೆಳೆಯ ಹಾಗೂ ಕೃಷಿ ಉತ್ಪನ್ನಗಳ ಬೆಲೆ ನಿಗದಿಪಡಿಸಲು ಸರ್ಕಾರ ಯಾವುದಾದರೂ ಸಮಿತಿ ರಚಿಸಿದೆಯೇ; ಹೌದಾದಲ್ಲಿ, ಸಮಿತಿಯಲ್ಲಿ ಬರುವ ಸದಸ್ಯರುಗಳು ಯಾರ್ಯಾರು; | ಜಿಲ್ಲಾ ಮಟ್ಟದಲ್ಲಿ ಕೃಷಿ ಬೆಳೆಯ ಹಾಗೂ ಕೃಷಿ ಉತ್ಪನ್ನಗಳ ಬೆಲೆ ನಿಗದಿಪಡಿಸಲು ಸರ್ಕಾರ ಯಾವುದೇ ಕಮಿಟಿ ರಚಿಸಿರುವುದಿಲ್ಲ. |
| ಈ) | ಜಿಲ್ಲಾ ಮಟ್ಟದ ಸಮಿತಿಯನ್ನು ತೆಗೆದು ಹಾಕಿ ಸರ್ಕಾರ ರಾಜ್ಯಮಟ್ಟದ ಸಮಿತಿಯನ್ನು ರಚಿಸಲು ಕಾರಣವೇನು? (ಸಂಪೂರ್ಣ ಮಾಹಿತಿ ನೀಡುವುದು). | ಅನ್ವಯಿಸುವುದಿಲ್ಲ. |

ಸಂಖ್ಯೆ: AGRI-ACT/57/2022

(ಬಿ.ಸಿ. ಪಾಟೀಲ್)
ಕೃಷಿ ಸಚಿವರು